# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 355
2. ಮಾನ್ಯ ಸದಸ್ಯರ ಹೆಸರು : ಶ್ರೀ ಸಿ.ಆರ್. ಮನೋಹರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 17/07/2019
4. ಉತ್ತರಿಸುವವರು : ಮಾನ್ಯ ಕಾರ್ಮಿಕ ಸಚಿವರು

| ಪ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಕಾರ್ಮಿಕ ಇಲಾಖೆಯ ವ್ಯಾಪ್ತಿಗೆ ಒಳಪಡುವ ಕಾರ್ಖಾನೆ ಸಂಸ್ಥೆಗಳು ಯಾವವು ಇಲಾಖೆಯಿಂದ ಪರವಾನಗಿಯನ್ನು ಪಡೆಯಲು ಅನುಸರಿಸಲಾಗುವ ಮಾನದಂಡಗಳೇನು: ಮತ್ತು ತಗಲುವ ವೆಚ್ಚವೆಷ್ಟು (ವಿವರ ನೀಡುವುದು) | ಕಾರ್ಖಾನೆಗಳಿಗೆ ಪರವಾನಗಿಯನ್ನು ಕಾರ್ಖಾನೆಗಳ ಕಾಯ್ದೆ, 1948 ರಡಿ ಕಾರ್ಖಾನೆ, ಬಾಯ್ಲರುಗಳು ಮತ್ತು ಕೈಗಾರಿಕಾ ಸ್ವಾಸ್ಥ್ಯ ಇಲಾಖೆ ವತಿಯಿಂದ ನೀಡಲಾಗುತ್ತಿದೆ. ಈ ಕೆಳಕಂಡ ಮಾನದಂಡದಂತೆ, ಉತ್ಪಾದನಾ ಘಟಕಗಳು, ಕಾರ್ಖಾನೆಗಳು ಮತ್ತು ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ವ್ಯಾಪ್ತಿಗೆ ಒಳಪಡುತ್ತವೆ;<br>• 10 ಅಥವಾ 10ಕ್ಕಿಂತ ಹೆಚ್ಚಿನ ಕಾರ್ಮಿಕರನ್ನು ನೇಮಿಸಿಕೊಂಡು ವಿದ್ಯುತ್ಚ್ಛಕ್ತಿ ಬಳಸಿ ಉತ್ಪಾದನಾ ಚಟುವಟಿಕೆ ಕೈಗೊಂಡಿರುವ ಕಾರ್ಖಾನೆಗಳು.<br>• 20 ಅಥವಾ 20 ಕ್ಕಿಂತ ಹೆಚ್ಚಿನ ಕಾರ್ಮಿಕರನ್ನು ನೇಮಿಸಿಕೊಂಡು ವಿದ್ಯುತ್ಚ್ಛಕ್ತಿ ಸಹಾಯವಿಲ್ಲದೆ ಉತ್ಪಾದನಾ ಚಟುವಟಿಕೆ ಕೈಗೊಂಡಿರುವ ಕಾರ್ಖಾನೆಗಳು.<br>• ಕಾರ್ಖಾನೆಗಳ ಕಾಯ್ದೆ, 1948 ಸೆಕ್ಷನ್ 85(1)ರಡಿಯಲ್ಲಿ ಅಧಿಸೂಚನೆ ಮಾಡಲಾದ ಕೆಲ ವರ್ಗದ ಕಾರ್ಖಾನೆಗಳು – 10 ಅಥವಾ 20ಕ್ಕಿಂತ ಕಡಿಮೆ ಕಾರ್ಮಿಕರನ್ನು ನೇಮಿಸಿಕೊಂಡು ಕ್ರಮವಾಗಿ ವಿದ್ಯುತ್ ಸಹಾಯದಿಂದ ಅಥವಾ ವಿದ್ಯುತ್ ಸಹಾಯವಿಲ್ಲದೇ ಉತ್ಪಾದನೆ ಕೈಗೊಂಡಿರುವ ಕಾರ್ಖಾನೆಗಳು.<br>**ಕಾರ್ಖಾನೆಗಳು ಮತ್ತು ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯಿಂದ ಪರವಾನಗಿಯನ್ನು ಪಡೆಯಲು ಅನುಸರಿಸಲಾಗುವ ಮಾನದಂಡಗಳು:**<br>• ಕಾರ್ಖಾನೆಗಳ ಅನುಭವದಾರರು/ವ್ಯವಸ್ಥಾಪಕರು ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು, 1969, ನಿಯಮ 3 ರಂತೆ ಕಾರ್ಖಾನೆಯ ಕಟ್ಟಡ ಹಾಗೂ ಯಂತ್ರೋಪಕರಣಗಳ ನಕ್ಷೆಗಳನ್ನು ಇಲಾಖೆಗೆ ಸಲ್ಲಿಸಿ ಅನುಮೋದನೆ ಪಡೆಯಬೇಕಾಗಿರುತ್ತದೆ. ನಕ್ಷಾನುಮೋದನೆ ನಂತರ ಕರ್ನಾಟಕ ಕಾರ್ಖಾನೆಗಳ ನಿಯಮಾವಳಿಗಳು, 1969ರ ನಿಯಮ 4 ರಂತೆ ಇಲಾಖೆಯಿಂದ ಕಾರ್ಖಾನೆಯನ್ನು ಉಪಯೋಗಕ್ಕೆ ತೆಗೆದುಕೊಳ್ಳಲು ಪರವಾನಗಿ ನೀಡಲಾಗುತ್ತದೆ.<br>• ಪರವಾನಗಿಯನ್ನು ನೀಡಲು ತಗಲುವ ವೆಚ್ಚವನ್ನು ಭರಿಸುವ |

ಕುರಿತಂತೆ ಅನುಭವದಾರರು ನಿಯಮಾನುಸಾರ ಅನುಬಂಧ-1ರಲ್ಲಿ ನಮೂದಿಸಿರುವಂತೆ ಶುಲ್ಕ ಪಾವತಿಸಬೇಕಾಗಿರುತ್ತದೆ.

ಮುಂದುವರೆದು, ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ-1961 ರಡಿಯ ಪ್ರಾವದಾನಗಳನ್ವಯ ಸಂಸ್ಥೆಗಳನ್ನು ನಿಯಮಾನುಸಾರ ನೋಂದಣಿ ಮಾಡಲಾಗುತ್ತಿದೆ. ಸದರಿ ಕಾಯ್ದೆಯ ಕಲಂ 4 ರನ್ವಯ ಸಂಸ್ಥೆಗಳ ಮಾಲೀಕರು ಸಂಸ್ಥೆಯು ಪ್ರಾರಂಭವಾಗಿ 30 ದಿನಗಳ ಒಳಗಾಗಿ ನೋಂದಣಿ ಪ್ರಮಾಣ ಪತ್ರವನ್ನು ಪಡೆಯಬೇಕಾಗಿದ್ದು, -ನೋಂದಣಿ ಪತ್ರವನ್ನು ಪಡೆಯಲು ಮಾಲೀಕರ ಹೆಸರು, ಸಂಸ್ಥೆಯ ಹೆಸರು ಮತ್ತು ವಿಳಾಸ ಹಾಗೂ ಇನ್ನಿತರ ಮಾಹಿತಿ ಮತ್ತು ನಿಗಧಿಪಡಿಸಿರುವ ದಾಖಲೆಗಳೊಂದಿಗೆ ಈ ಉದ್ದೇಶಕ್ಕಾಗಿ ರೂಪಿಸಲಾಗಿರುವ ಇ-ಕಾರ್ಮಿಕ ತಂತ್ರಾಂಶವಾದ http:://labouronline.kar.nic.in ರ ಮೂಲಕ ಅರ್ಜಿಯನ್ನು ಆನ್‌ಲೈನ್ ಮೂಲಕ ಸಲ್ಲಿಸಿ, ಕಾರ್ಯವ್ಯಾಪ್ತಿಯ ಹಿರಿಯ ಕಾರ್ಮಿಕ ನಿರೀಕ್ಷಕರು/ಕಾರ್ಮಿಕ ನಿರೀಕ್ಷಕರಿಂದ ನೋಂದಣಿ ಪ್ರಮಾಣ ಪತ್ರವನ್ನು ಪಡೆಯಬಹುದಾಗಿರುತ್ತದೆ.

ನೋಂದಣಿ ಪ್ರಮಾಣ ಪತ್ರವನ್ನು ಪಡೆಯಲು ಶುಲ್ಕವನ್ನು ನಿಗಧಿಪಡಿಸಿದ್ದು, ಪ್ರಸ್ತುತ ಚಾಲ್ತಿಯಲ್ಲಿರುವ ನೋಂದಣಿಯ ಶುಲ್ಕ ಈ ಕೆಳಕಂಡಂತೆ ಇರುತ್ತದೆ.

| ಕಾರ್ಮಿಕರ ಸಂಖ್ಯೆ | ಶುಲ್ಕ (ರೂ) |
|---|---|
| 0 | 300/- |
| 1-9 | 600/- |
| 10-19 | 4,000/- |
| 20-49 | 10,000/- |
| 50-99 | 20,000/- |
| 100-250 | 40,000/- |
| 251-500 | 50,000/- |
| 501-1000 | 70,000/- |
| Above 1000 | 75,000/- |

ಆ. ಪರವಾನಗಿಯನ್ನು ಪಡೆದ ಸಂಸ್ಥೆಗಳಲ್ಲಿ ಕಾರ್ಮಿಕ ಕಲ್ಯಾಣಕ್ಕಾಗಿ ಯಾವ ಯಾವ ಯೋಜನೆಗಳನ್ನು ರೂಪಿಸಬೇಕಾಗಿದೆ:

ಪರವಾನಗಿಯನ್ನು ಪಡೆದ ಕಾರ್ಖಾನೆಗಳಲ್ಲಿ ಕಾರ್ಮಿಕರ ಕಲ್ಯಾಣಕ್ಕಾಗಿ ಈ ಕೆಳಕಂಡ ಸೌಲಭ್ಯಗಳನ್ನು ಕಾರ್ಖಾನೆಯ ಅನುಭವದಾರರು ಒದಗಿಸಬೇಕಾಗಿರುತ್ತದೆ.

- 30 ಕ್ಕಿಂತ ಹೆಚ್ಚು ಮಹಿಳಾ ಕಾರ್ಮಿಕರು ಇದ್ದಲ್ಲಿ ಅಂತಹ ಮಹಿಳಾ ಕಾರ್ಮಿಕರ 6 ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳಿಗೆ ಬಾಲವಾಡಿ ಸೌಲಭ್ಯ
- 150 ಕ್ಕಿಂತ ಹೆಚ್ಚಿನ ಕಾರ್ಮಿಕರಿದ್ದಲ್ಲಿ ವಿಶ್ರಾಂತಿ ಗೃಹ/ಲಂಚ್ ರೂಂ/ಶೆಲ್ಟರ್ಸ್
- ಪ್ರತಿ 150 ಕಾರ್ಮಿಕರಿಗೆ ಒಂದರಂತೆ ಪ್ರಥಮ ಚಿಕಿತ್ಸೆ

| | | |
|---|---|---|
| | | ಉಪಕರಣಗಳ ಪೆಟ್ಟಿಗೆ.<br>• 250ಕ್ಕಿಂತ ಹೆಚ್ಚಿನ ಕಾರ್ಮಿಕರಿದ್ದಲ್ಲಿ ನಿಯಮಾನುಸಾರ ಉಪಾಹಾರ ಗೃಹ<br>• 500ಕ್ಕಿಂತ ಹೆಚ್ಚಿನ ಕಾರ್ಮಿಕರ ನೇಮಕಾತಿ ಇದ್ದಲ್ಲಿ, ವೈದ್ಯಾಧಿಕಾರಿಗಳು, ಅರೆ ವೈದ್ಯಕೀಯ ಸಿಬ್ಬಂದಿಯೊಂದಿಗೆ ಆಂಬ್ಯುಲೆನ್ಸ್ ಕೊಠಡಿ ಮತ್ತು ಕಲ್ಯಾಣಾಧಿಕಾರಿಗಳು<br>• 1000 ಕ್ಕಿಂತ ಸಾಮಾನ್ಯವಾಗಿ ಹೆಚ್ಚು ಕೆಲಸಗಾರರಿದ್ದಲ್ಲಿ ನಿಗಧಿಪಡಿಸಿದ ವಿದ್ಯಾರ್ಹತೆಯುಳ್ಳ ಸುರಕ್ಷತಾ ಅಧಿಕಾರಿಯ ನೇಮಕಾತಿಯ ಅವಶ್ಯಕತೆ ಇರುತ್ತದೆ.<br>ಸಂಸ್ಥೆಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ಕಾರ್ಮಿಕರ ಸೇವಾ ಭದ್ರತೆ ಹಾಗೂ ಕಲ್ಯಾಣಕ್ಕಾಗಿ ಕೇಂದ್ರ ಮತ್ತು ರಾಜ್ಯ ಸರ್ಕಾರ ರೂಪಿಸಿರುವ ವಿವಿಧ ಕಾರ್ಮಿಕ ಕಾಯ್ದೆಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಮುಖ್ಯವಾಗಿ ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ, ಕನಿಷ್ಟ ವೇತನ ಕಾಯ್ದೆ, ವೇತನ ಪಾವತಿ ಕಾಯ್ದೆ, ಬೋನಸ್ ಪಾವತಿ ಕಾಯ್ದೆ, ಉಪದಾನ ಪಾವತಿ ಕಾಯ್ದೆ. ಸಮಾನ ವೇತನ ಕಾಯ್ದೆ, ಕರ್ನಾಟಕ ಕಾರ್ಮಿಕ ಕಲ್ಯಾಣ ನಿಧಿ ಕಾಯ್ದೆ, ಹೆರಿಗೆ ಭತ್ಯೆ ಕಾಯ್ದೆಗಳನ್ನು ಕಾರ್ಮಿಕ ಇಲಾಖೆಯಿಂದ ಅನುಷ್ಠಾನ ಗೊಳಿಸಲಾಗುತ್ತಿದೆ.<br>ಈ ಕಾಯ್ದೆಗಳು ಕಾರ್ಮಿಕರ ಸಂಖ್ಯೆಗೆ ಅನುಗುಣವಾಗಿ ಸಂಸ್ಥೆಗಳಿಗೆ ಅನ್ವಯವಾಗುತ್ತದೆ. ಈ ಕಾಯ್ದೆಗಳಲ್ಲಿ ಕಾರ್ಮಿಕರ ಸೇವಾ ಷರತ್ತುಗಳು. ರಜೆ ಹಾಗೂ ಇತರೆ ಭತ್ಯೆಗಳು, ಕಲ್ಯಾಣ ಹಾಗೂ ಸುರಕ್ಷಾ ಪ್ರಾವಧಾನಗಳು ಒಳಗೊಂಡಿರುತ್ತದೆ.<br>ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಮೂಲಕ ಸಂಘಟಿತ ಕ್ಷೇತ್ರದಲ್ಲಿ ಕೆಲಸ ನಿರ್ವಹಿಸುತ್ತಿರುವ ಕರ್ನಾಟಕ ಕಲ್ಯಾಣ ನಿಧಿ ಕಾಯ್ದೆಯಡಿ ನಿಯಮಾನುಸಾರ ವಂತಿಕೆ ಮಾಡುವ ಕಾರ್ಮಿಕರಿಗೆ ಶೈಕ್ಷಣಿಕ ಧನಸಹಾಯ ಹಾಗೂ ವೈದ್ಯಕೀಯ ಮರುಪಾವತಿಯ ಸೌಲಭ್ಯಗಳನ್ನು ಜಾರಿಗೊಳಿಸಲಾಗುತ್ತಿದೆ. |
| ಇ | ಕಳೆದ 3 ವರ್ಷಗಳಲ್ಲಿ ಇಲಾಖೆಯಿಂದ ಪರವಾನಗಿ ಪಡೆಯದೆ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆ/ಸಂಸ್ಥೆಗಳು ಯಾವುವು (ವರ್ಷವಾರು, ಜಿಲ್ಲಾವಾರು ವಿವರಗಳನ್ನು ನೀಡುವುದು) | ಕಳೆದ 3 ವರ್ಷಗಳಲ್ಲಿ ಕಾರ್ಖಾನೆ, ಬಾಯ್ಲರುಗಳು ಮತ್ತು ಕೈಗಾರಿಕಾ ಸ್ವಾಸ್ಥ್ಯ ಇಲಾಖೆಯಿಂದ ಪರವಾನಗಿ ಪಡೆಯದೇ ಕಾರ್ಯನಿರ್ವಹಿಸುತ್ತಿರುವ ಕಾರ್ಖಾನೆಗಳು ಯಾವುದು ಇರುವುದಿಲ್ಲ.<br>ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ, 1961 ರಡಿಯಲ್ಲಿ ನೋಂದಣಿ ಪ್ರಮಾಣ ಪತ್ರ ಪಡೆಯದೆ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳ ನಿರ್ದಿಷ್ಟ ಮಾಹಿತಿ ಲಭ್ಯವಿರುವುದಿಲ್ಲ. ಆದರೆ, ನೋಂದಣಿ ಪ್ರಮಾಣ ಪತ್ರ ಪಡೆಯದೆ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಗಳು ಕಂಡುಬಂದಲ್ಲಿ ಅಂತಹ ಸಂಸ್ಥೆಗಳ ವಿರುದ್ಧ ನಿಯಮಾನುಸಾರ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ. |

| | | |
|---|---|---|
| ಈ | ಇಂತಹ ಕಾರ್ಖಾನೆ/ಸಂಸ್ಥೆಗಳ ವಿರುದ್ಧ ಸರ್ಕಾರ ಕ್ರಮ ಕೈಗೊಂಡಿದೆಯೇ; ಹಾಗಿದ್ದಲ್ಲಿ (ಸಂಪೂರ್ಣ ವಿವರ ನೀಡುವುದು)<br><br>– | ಕರ್ನಾಟಕ ಅಂಗಡಿ ಮತ್ತು ವಾಣಿಜ್ಯ ಸಂಸ್ಥೆಗಳ ಕಾಯ್ದೆ-1961 ರಡಿ ನೋಂದಣಿ ಪ್ರಮಾಣ ಪತ್ರ ಪಡೆಯದೆ ಕಾರ್ಯ ನಿರ್ವಹಿಸುತ್ತಿರುವ ಸಂಸ್ಥೆಗಳು ಕಂಡುಬಂದಲ್ಲಿ ತಪಾಸಣೆ ನಡೆಸಿ ಸದರಿ ಸಂಸ್ಥೆಗಳ ವಿರುದ್ಧ ಮೊಕದ್ದಮೆಗಳನ್ನು ಹೂಡಲಾಗುತ್ತಿದೆ. ಮೊಕದ್ದಮೆ ಹೂಡಿದ ವರ್ಷವಾರು ವಿವರಗಳು ಈ ಕೆಳಕಂಡಂತೆ ಇರುತ್ತದೆ.<br><br>ಕ್ರಸಂ. \| ವರ್ಷ \| ಹೂಡಲಾದ ಮೊಕದ್ದಮೆಗಳ ಸಂಖ್ಯೆ<br>1 \| 2016-17 \| 584<br>2 \| 2017-18 \| 501<br>3 \| 2018-19 \| 638 |
| ಉ | ಕಟ್ಟಡ ನಿರ್ಮಾಣ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುವ ಕಾರ್ಮಿಕರು ನಿರ್ಮಾಣ ಸ್ಥಳದಲ್ಲಿ ಅಕಾಲಿಕ ಸಾವಿಗೆ ತುತ್ತಾದಲ್ಲಿ ಮೃತರ ಕುಟುಂಬಕ್ಕೆ ಪರಿಹಾರವನ್ನು ಭರಿಸುವವರು (ಘಟನೆಯಾಧಾರಿತ ವಿವರಗಳನ್ನು ನೀಡುವುದು) | ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ (ಉದ್ಯೋಗ ಕ್ರಮೀಕರಣ ಮತ್ತು ಸೇವಾ ಷರತ್ತುಗಳು) ಕರ್ನಾಟಕ ನಿಯಮಗಳು 2006ರ ನಿಯಮ 47 ರನ್ವಯ ನೋಂದಾಯಿತ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು (ಕೆಲಸದ ಸ್ಥಳ ಹೊರತುಪಡಿಸಿ) ಅಪಘಾತದಿಂದ ಮರಣ ಹೊಂದಿದಲ್ಲಿ ನೋಂದಾಯಿತ ಕಟ್ಟಡ ಕಾರ್ಮಿಕನ ನಾಮನಿರ್ದೇಶಿತರಿಗೆ ರೂ.5,00,000/- ಪರಿಹಾರವನ್ನು ಕರ್ನಾಟಕ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ಕಲ್ಯಾಣ ಮಂಡಳಿಯಿಂದ ನೀಡಲಾಗುತ್ತದೆ.<br>ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರು ಕೆಲಸದ ಸ್ಥಳದಲ್ಲಿ ಮೃತಪಟ್ಟಲ್ಲಿ ನೌಕರರ ಪರಿಹಾರ ಕಾಯ್ದೆ 1923 ರಡಿಯಲ್ಲಿ ಮೃತನ ಅವಲಂಬಿತರು ಮಾಲೀಕರಿಂದ ಪರಿಹಾರವನ್ನು ಪಡೆಯಲು ಅವಕಾಶವಿರುತ್ತದೆ. |
| ಊ | ಕಳೆದ 3 ವರ್ಷಗಳಲ್ಲಿ ಈ ರೀತಿಯ ಎಷ್ಟು ಪ್ರಕರಣಗಳು ದಾಖಲಾಗಿವೆ; ಇವುಗಳಲ್ಲಿ ಎಷ್ಟು ಮೃತರ ಕುಟುಂಬಕ್ಕೆ ಪರಿಹಾರವನ್ನು ಒದಗಿಸಲಾಗಿದೆ; ಜಿಲ್ಲಾವಾರು ಮತ್ತು ವರ್ಷವಾರು ವಿವರಗಳನ್ನು ನೀಡುವುದು ಹಾಗೂ ಪರಿಹಾರ ಒದಗಿಸದಿರುವ ಪ್ರಕರಣಗಳೆಷ್ಟು? | ಕಳೆದ 3 ವರ್ಷಗಳಲ್ಲಿ ಕಟ್ಟಡ ಕಾರ್ಮಿಕರು ನಿರ್ಮಾಣ ಸ್ಥಳದಲ್ಲಿ ಅಪಘಾತದಿಂದ ಮೃತಪಟ್ಟ ಕಟ್ಟಡ ಕಾರ್ಮಿಕರ ನಾಮನಿರ್ದೇಶಿತರಿಗೆ ನೀಡಲಾದ ಸೌಲಭ್ಯಗಳ ವಿವರಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |

**ಕಾಇ 17 ಕಾಬಾನಿ 2019**

(ವೆಂಕಟರಮಣಪ್ಪ)
ಮಾನ್ಯ ಕಾರ್ಮಿಕ ಸಚಿವರು

## TABLE - A

**[ See Rule 5(1) ]**

**Scale of Fees Payable for Licence and Annual Renewal of Licence by Factories**

| Quantity of H.P Installed | Maximum number of persons to be employed on any day during the year | | | | | | | | | |
|---|---|---|---|---|---|---|---|---|---|---|
| | Upto 20 | From 21 to 50 | From 51 to 100 | From 101 to 250 | From 251 to 500 | From 501 to 750 | From 751 to 1000 | From 1001 to 5000 | From 5001 to 10000 | From 10001 and above |
| 1 | 2 | 3 | 4 | 5 | 6 | 7 | 8 | 9 | 10 | 11 |
| | Rs. | Rs. | Rs. | Rs. | Rs. | Rs. | Rs. | Rs. | Rs. | Rs. |
| Nil | 540 | 1080 | 3240 | 3480 | 8100 | 11880 | 15600 | 19440 | 23280 | 24300 |
| Upto 10 HP | 1080 | 2160 | 3360 | 7560 | 14580 | 21600 | 28320 | 32400 | 40500 | 50220 |
| Above 10 HP Upto 50 HP | 2160 | 3120 | 4320 | 8640 | 15960 | 23040 | 30000 | 34020 | 43740 | 51840 |
| Above 50 HP Upto 100 HP | 3120 | 4320 | 5640 | 9960 | 16080 | 24840 | 32400 | 36180 | 46440 | 55080 |
| Above 100 HP Upto 250 HP | 4860 | 5400 | 6420 | 11340 | 18900 | 27000 | 36120 | 38400 | 48840 | 57780 |
| Above 250 HP Upto 500 HP | 5400 | 6480 | 8100 | 13380 | 22140 | 30960 | 39720 | 44820 | 56700 | 66960 |
| Above 500 HP Upto 1000 HP | 8640 | 9960 | 11880 | 18360 | 29160 | 40500 | 50760 | 57240 | 61020 | 84780 |
| Above 1000 HP Upto 5000 HP | 10800 | 12960 | 16200 | 25440 | 41040 | 56700 | 71505 | 79800 | 102600 | 121200 |
| Above 5000 HP Upto 10000 HP | 21600 | 25920 | 32400 | 50880 | 82080 | 113400 | 142995 | 159600 | 205200 | 242400 |
| Above 10000 HP | 36600 | 43200 | 48600 | 76320 | 123120 | 170100 | 214500 | 239400 | 307800 | 363600 |

## TABLE - B

**Scale of fees Licence and Annual Renewal of Licence by electricity generating , transforming or transmitting factories or attached powerhouse and for heating circuits in addition to the scale of fees payable in TABLE "A"**

| | Total Installed capacity (in KW) | Fee payable (In Rs) | |
|---|---|---|---|
| A | 50 KW or less | 1080 | A |
| B | Over 50 KW but not over 100 KW | 1320 | B |
| C | Over 100 KW but not over 150 KW | 1680 | C |
| D | Over 150 KW but not over 300 KW | 2400 | D |
| E | Over 300 KW but not over 700 KW | 5400 | E |
| F | Over 700 KW but not over 1000 KW | 9600 | F |
| G | Over 1000 KW but not over 5000 KW | 13980 | G |
| H | Over 5000 KW but not over 10000 KW | 23340 | H |
| I | Over 10000 KW but not over 50000 KW | 38820 | I |
| J | Over 50000 KW but not over 60000 KW | 46560 | J |
| K | Over 60000 KW but not over 80000 KW | 54360 | K |
| L | Over 80000 KW but not over 100000 KW | 62100 | L |
| M | Over 100000 KW but not over 150000 KW | 77640 | M |
| N | Over 150000 KW but not over 200000 KW | 92520 | N |
| O | Over 200000 KW but not over 300000 KW | 108720 | O |
| P | Over 300000 KW | 124200 | P |

## ಅನುಬಂಧ-2

## ಅಪಘಾತವಾಗಿ ಮೃತಪಟ್ಟ ಕಟ್ಟಡ ಮತ್ತು ಇತರೆ ನಿರ್ಮಾಣ ಕಾರ್ಮಿಕರ ನಾಮನಿರ್ದೇಶಿತರಿಗೆ ಮಂಜೂರು ಮಾಡಲಾದ ಸಹಾಯಧನದ ವಿವರ

**1.2016–17 ನೇ ಸಾಲಿನ ವಿವರ**

| ಕ್ರ.ಸಂಖ್ಯೆ | ಜಿಲ್ಲೆ | ಕಟ್ಟಡ ನಿರ್ಮಾಣ ಸ್ಥಳಗಳಲ್ಲಿ ಅಪಘಾತದಿಂದ ಮೃತಪಟ್ಟ ಕಾರ್ಮಿಕರ ಸಂಖ್ಯೆ | ವಿತರಿಸಲಾದ ಪರಿಹಾರದ ಮೊತ್ತ ರೂ. |
|---|---|---|---|
| 1 | ಬೆಳಗಾವಿ | – | – |
| 2 | ಬಾಗಲಕೋಟೆ | – | – |
| 3 | ವಿಜಯಪುರ | – | – |
| 4 | ಹುಬ್ಬಳ್ಳಿ | 02 | 1,00,000/– |
| 5 | ಗದಗ್ | – | – |
| 6 | ಹಾವೇರಿ | – | – |
| 7 | ಕಾರವಾರ | – | – |
| 8 | ಕಲಬುರಗಿ | 01 | 2,00,000/– |
| 9 | ಬೀದರ್ | 01 | 2,00,000/– |
| 10 | ಯಾದಗಿರಿ | 02 | 4,00,000/– |
| 11 | ರಾಯಚೂರು | 01 | 2,00,000/– |
| 12 | ಕೊಪ್ಪಳ | 01 | 2,00,000/– |
| 13 | ದಾವಣಗೆರೆ | 01 | 1,50,000/– |
| 14 | ಬಳ್ಳಾರಿ | – | – |
| 15 | ಚಿತ್ರದುರ್ಗ | – | – |
| 16 | ಮೈಸೂರು | 03 | 6,00,000/– |
| 17 | ಮಂಡ್ಯ | 01 | 2,00,000/– |
| 18 | ಚಾಮರಾಜನಗರ | 02 | 4,00,000/– |
| 19 | ಹಾಸನ | – | – |
| 20 | ಚಿಕ್ಕಮಗಳೂರು | 04 | 3,00,000/– |
| 21 | ಕೊಡಗು | – | – |
| 22 | ಮಂಗಳೂರು | 02 | 3,50,000/– |
| 23 | ಉಡುಪಿ | 01 | 50,000/– |
| 24 | ಶಿವಮೊಗ್ಗ | 02 | 3,50,000/– |
| 25 | ಬೆಂಗಳೂರು | 07 | 8,00,000/– |
| 26 | ತುಮಕೂರು | 02 | 2,00,000/– |
| 27 | ರಾಮನಗರ | – | – |
| 28 | ಕೋಲಾರ | 07 | 8,00,000/– |
| 29 | ಚಿಕ್ಕಬಳ್ಳಾಪುರ | 03 | 6,00,000/– |
| ಒಟ್ಟು | | 43 | 62,00,000/- |

...1

2. **2017-18 ನೇ ಸಾಲಿನ ವಿವರ**

| ಕ್ರ.ಸಂಖ್ಯೆ | ಜಿಲ್ಲೆ | ಕಟ್ಟಡ ನಿರ್ಮಾಣ ಸ್ಥಳಗಳಲ್ಲಿ ಅಪಘಾತದಿಂದ ಮೃತಪಟ್ಟ ಕಾರ್ಮಿಕರ ಸಂಖ್ಯೆ | ವಿತರಿಸಲಾದ ಪರಿಹಾರದ ಮೊತ್ತ ರೂ. |
|---|---|---|---|
| 1 | ಬೆಳಗಾವಿ | - | - |
| 2 | ಬಾಗಲಕೋಟೆ | - | - |
| 3 | ವಿಜಯಪುರ | 01 | 50,000/- |
| 4 | ಹುಬ್ಬಳ್ಳಿ | 01 | 3,00,000/- |
| 5 | ಗದಗ್ | - | - |
| 6 | ಹಾವೇರಿ | - | - |
| 7 | ಕಾರವಾರ | - | - |
| 8 | ಕಲಬುರಗಿ | 01 | 2,00,000/- |
| 9 | ಬೀದರ್ | 01 | 2,00,000/- |
| 10 | ಯಾದಗಿರಿ | 01 | 2,00,000/- |
| 11 | ರಾಯಚೂರು | - | - |
| 12 | ಕೊಪ್ಪಳ | - | - |
| 13 | ದಾವಣಗೆರೆ | 04 | 11,00,000/- |
| 14 | ಬಳ್ಳಾರಿ | 01 | 3,00,000/- |
| 15 | ಚಿತ್ರದುರ್ಗ | 01 | 3,00,000/- |
| 16 | ಮೈಸೂರು | 03 | 6,00,000/- |
| 17 | ಮಂಡ್ಯ | 03 | 9,00,000/- |
| 18 | ಚಾಮರಾಜನಗರ | 02 | 6,00,000/- |
| 19 | ಹಾಸನ | - | - |
| 20 | ಚಿಕ್ಕಮಗಳೂರು | - | - |
| 21 | ಕೊಡಗು | - | - |
| 22 | ಮಂಗಳೂರು | 02 | 3,50,000/- |
| 23 | ಉಡುಪಿ | - | - |
| 24 | ಶಿವಮೊಗ್ಗ | - | - |
| 25 | ಬೆಂಗಳೂರು | 04 | 9,00,000/- |
| 26 | ತುಮಕೂರು | 02 | 3,00,000/- |
| 27 | ರಾಮನಗರ | - | - |
| 28 | ಕೋಲಾರ | 05 | 8,00,000/- |
| 29 | ಚಿಕ್ಕಬಳ್ಳಾಪುರ | 2 | 4,00,000/- |
| | ಒಟ್ಟು | 34 | 75,00,000/- |

...2

**2018-19 ನೇ ಸಾಲಿನ ವಿವರ**

| ಕ್ರ.ಸಂಖ್ಯೆ | ಜಿಲ್ಲೆ | ಕಟ್ಟಡ ನಿರ್ಮಾಣ ಸ್ಥಳಗಳಲ್ಲಿ ಅಪಘಾತದಿಂದ ಮೃತಪಟ್ಟ ಕಾರ್ಮಿಕರ ಸಂಖ್ಯೆ | ವಿತರಿಸಲಾದ ಪರಿಹಾರದ ಮೊತ್ತ ರೂ. |
|---|---|---|---|
| 1 | ಬೆಳಗಾವಿ | 01 | 1,00,000/- |
| 2 | ಬಾಗಲಕೋಟೆ | - | - |
| 3 | ವಿಜಯಪುರ | - | - |
| 4 | ಹುಬ್ಬಳ್ಳಿ | 01 | 50,000/- |
| 5 | ಗದಗ್ | - | - |
| 6 | ಹಾವೇರಿ | - | - |
| 7 | ಕಾರವಾರ | - | - |
| 8 | ಕಲಬರಗಿ | 01 | 2,00,000/- |
| 9 | ಬೀದರ್ | 01 | 2,00,000/- |
| 10 | ಯಾದಗಿರಿ | - | - |
| 11 | ರಾಯಚೂರು | - | - |
| 12 | ಕೊಪ್ಪಳ | - | - |
| 13 | ದಾವಣಗೆರೆ | 01 | 3,00,000/- |
| 14 | ಬಳ್ಳಾರಿ | - | - |
| 15 | ಚಿತ್ರದುರ್ಗ | 01 | 2,00,000/- |
| 16 | ಮೈಸೂರು | 09 | 27,00,000/- |
| 17 | ಮಂಡ್ಯ | 05 | 17,00,000/- |
| 18 | ಚಾಮರಾಜನಗರ | 04 | 12,00,000/- |
| 19 | ಹಾಸನ | - | - |
| 20 | ಚಿಕ್ಕಮಗಳೂರು | - | - |
| 21 | ಕೊಡಗು | - | - |
| 22 | ಮಂಗಳೂರು | - | - |
| 23 | ಉಡುಪಿ | - | - |
| 24 | ಶಿವಮೊಗ್ಗ | - | - |
| 25 | ಬೆಂಗಳೂರು | 01 | 5,00,000/- |
| 26 | ತುಮಕೂರು | - | - |
| 27 | ರಾಮನಗರ | - | - |
| 28 | ಕೋಲಾರ | 01 | 3,00,000/- |
| 29 | ಚಿಕ್ಕಬಳ್ಳಾಪುರ | 01 | 5,00,000/- |
| | ಒಟ್ಟು | 27 | 79,50,000/- |